ಬೀಯರ್‌ನ್ನು ಮಾರಾಟ ಮಾಡುವ ಗುತ್ತಿಗೆ) ನಿಯಮ 1976 ರಡಿಯಲ್ಲಿನ ನಿಯಮಗಳು ಮತ್ತು ಕರ್ನಾಟಕ ಅಬಕಾರಿ ಸನ್ನದುಗಳ ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು.

3) ಮೈಕ್ರೋಬ್ರಿವರಿ ಸನ್ನದುಗಳುಃ ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಅದರಡಿ ರೂಪಿತವಾಗಿರುವ ಕರ್ನಾಟಕ ಅಬಕಾರಿ (ಬ್ರೀವರಿ) (ತಿದ್ದುಪಡಿ) ನಿಯಮಗಳು 2010 ರಡಿಯಲ್ಲಿ ರೂಪಿತವಾಗಿರುವ ನಿಯಮಗಳು.

4) ವೈನ್ ಟಾವರಿನ್/ವೈನ್ ಬೋಟಿಕ್ ಸನ್ನದುಗಳು ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಅದರಡಿ ರೂಪಿತವಾಗಿರುವ ಕರ್ನಾಟಕ ಅಬಕಾರಿ (ಚಿಲ್ಲರೆಯಾಗಿ ವೈನ್ನು ಮಾರಾಟ ಮಾಡುವ ಹಕ್ಕು) ನಿಯಮಗಳು 2008 ರಡಿಯಲ್ಲಿನ ನಿಯಮಗಳು.

ಈ ಮೇಲಿನ ಎಲ್ಲಾ ಸನ್ನದುಗಳು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು 1967 ರಲ್ಲಿನ ನಿಯಮಗಳಡಿ ರೂಪಿಸಿರುವ ನಿರ್ಬಂಧಗಳನ್ನು ಪಾಲಿಸಬೇಕಾಗುತ್ತದೆ.

ಮುಂದುವರೆದು, ಈ ಎಲ್ಲಾ ಸನ್ನದುಗಳನ್ನು ಮಂಜೂರು ಮಾಡುವಾಗ ಅರ್ಜಿದಾರರುಗಳು ಕರ್ನಾಟಕ ಅಬಕಾರಿ (ದೇಶೀ ಮತ್ತು ವಿದೇಶೀ ಮದ್ಯ ಮಾರಾಟ) ನಿಯಮಗಳು, 1968ರ ನಿಯಮ 4(ಬಿ) ಪ್ರಕಾರ ಮತ್ತು ಕರ್ನಾಟಕ ಅಬಕಾರಿ (ಬ್ರವರಿ) ನಿಯಮಗಳು 1967ರ ನಿಯಮ 5(ಬಿ) ರನ್ವಯ ಅನರ್ಹರಾಗದಿರುವ ಬಗ್ಗೆ ಸ್ವಯಂಘೋಷಿತ ಮುಚ್ಚಳಿಕೆಯನ್ನು ಪಡೆಯಲಾಗುತ್ತಿರುತ್ತದೆ.

ಆಇ 18 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

Annexure -

ಅನುಬಂಧ-2

## 2020-21ನೇ ಸಾಲಿನ ಅಬಕಾರಿ ವರ್ಷದಲ್ಲಿ (ಜನವರಿ-2021 ಅಂತ್ಯಕ್ಕೆ) ನವೀಕರಣಗೊಂಡ ಎಲ್ಲಾ ರೀತಿಯ ಸನ್ನದುಗಳ ವಿವರ

| ಕ್ರ ಸಂ | ಜಿಲ್ಲೆಗಳು | ಸಿಎಲ್-2 (ಚಿಲ್ಲರೆ ಅಂಗಡಿಗಳು) | ಸಿಎಲ್-4 (ಕ್ಲಬ್‌ಗಳು) | ಸಿಎಲ್-6ಎ ಸ್ಟಾರ್ ಹೋಟೆಲ್‌ಗಳು | ಸಿಎಲ್-7 (ಹೋಟೆಲ್ ಮತ್ತು ವಸತಿಗೃಹ) | ಸಿಎಲ್-8 (ಮಿಲಿಟರಿ ಕ್ಯಾಂಟೀನ್ ಮಳಿಗೆ) | ಸಿಎಲ್-9 (ಬಾರ್ ಮತ್ತು ರೆಸ್ಟೋರೆಂಟ್) | ಸಿಎಲ್-11ಸಿ (ಎಂ.ಎಸ್.ಐ.ಎಲ್. ಶಾಪ್) | ಆರ್.ವಿ.ಬಿ | ವೈನ್ ಟಾವರ್ನ್ | ವೈನ್ ಬೋಟಿಕ್ | ಮೈಕ್ರೋ ಬ್ರೆವರಿ | ಇತರೆ | ಒಟ್ಟು ಸಂಖ್ಯೆ |
|---|---|---|---|---|---|---|---|---|---|---|---|---|---|---|
| | ಬೆಂಗಳೂರು ವಿಭಾಗ (ಉತ್ತರ) | | | | | | | | | | | | | |
| 1 | ಬೆಂಗಳೂರು ನಗರ ಜಿಲ್ಲೆ - 1 | 112 | 11 | 5 | 26 | 8 | 182 | 16 | 53 | 8 | 6 | 2 | 0 | 429 |
| 2 | ಬೆಂಗಳೂರು ನಗರ ಜಿಲ್ಲೆ - 2 | 133 | 9 | 7 | 30 | 9 | 168 | 10 | 43 | 14 | 2 | 6 | 0 | 431 |
| 3 | ಬೆಂಗಳೂರು ನಗರ ಜಿಲ್ಲೆ - 3 | 132 | 13 | 0 | 30 | 0 | 182 | 11 | 23 | 3 | 1 | 1 | 0 | 396 |
| 4 | ಬೆಂಗಳೂರು ನಗರ ಜಿಲ್ಲೆ - 4 | 67 | 11 | 14 | 39 | 0 | 130 | 4 | 69 | 11 | 5 | 3 | 0 | 353 |
| 5 | ಬೆಂಗಳೂರು ಗ್ರಾಮಾಂತರ | 64 | 3 | 2 | 46 | 0 | 61 | 10 | 7 | 11 | 6 | 0 | 10 | 220 |
| 6 | ಚಿಕ್ಕಬಳ್ಳಾಪುರ | 70 | 1 | 0 | 7 | 1 | 72 | 25 | 1 | 1 | 3 | 0 | 1 | 182 |
| 7 | ತುಮಕೂರು | 193 | 3 | 0 | 25 | 0 | 95 | 51 | 4 | 3 | 5 | 0 | 0 | 379 |
| | ಒಟ್ಟು | 771 | 51 | 28 | 203 | 18 | 890 | 127 | 200 | 51 | 28 | 12 | 11 | 2390 |
| | ಬೆಂಗಳೂರು ವಿಭಾಗ (ದಕ್ಷಿಣ) | | | | | | | | | | | | | |
| 1 | ಬೆಂಗಳೂರು ನಗರ ಜಿಲ್ಲೆ - 5 | 90 | 8 | 16 | 24 | 9 | 164 | 4 | 99 | 23 | 6 | 12 | 0 | 455 |
| 2 | ಬೆಂಗಳೂರು ನಗರ ಜಿಲ್ಲೆ - 6 | 122 | 12 | 0 | 36 | 0 | 192 | 9 | 67 | 3 | 3 | 5 | 0 | 449 |
| 3 | ಬೆಂಗಳೂರು ನಗರ ಜಿಲ್ಲೆ - 7 | 96 | 7 | 13 | 26 | 10 | 211 | 4 | 112 | 20 | 8 | 16 | 0 | 523 |
| 4 | ಬೆಂಗಳೂರು ನಗರ ಜಿಲ್ಲೆ - 8 | 121 | 6 | 2 | 85 | 0 | 140 | 5 | 38 | 2 | 2 | 5 | 2 | 408 |
| 5 | ಕೋಲಾರ | 104 | 3 | 0 | 33 | 1 | 89 | 21 | 1 | 0 | 2 | 0 | 0 | 254 |
| 6 | ರಾಮನಗರ | 89 | 3 | 1 | 8 | 0 | 58 | 16 | 3 | 2 | 2 | 0 | 1 | 183 |
| | ಒಟ್ಟು | 622 | 39 | 32 | 212 | 20 | 854 | 59 | 320 | 50 | 23 | 38 | 3 | 2272 |
| | ಬೆಳಗಾವಿ ವಿಭಾಗ | | | | | | | | | | | | | |
| 1 | ಬಾಗಲಕೋಟೆ | 101 | 7 | 0 | 61 | 1 | 65 | 41 | 0 | 4 | 2 | 0 | 2 | 284 |
| 2 | ಬೆಳಗಾವಿ ಉತ್ತರ | 132 | 5 | 0 | 52 | 1 | 54 | 39 | 0 | 9 | 0 | 0 | 0 | 292 |
| 3 | ಬೆಳಗಾವಿ ದಕ್ಷಿಣ | 143 | 17 | 2 | 34 | 7 | 94 | 35 | 1 | 23 | 2 | 1 | 0 | 359 |
| 4 | ವಿಜಯಪುರ | 90 | 16 | 0 | 40 | 1 | 42 | 40 | 0 | 6 | 2 | 0 | 1 | 238 |
| 5 | ಧಾರವಾಡ | 95 | 14 | 4 | 39 | 2 | 95 | 27 | 0 | 1 | 1 | 0 | 0 | 278 |
| 6 | ಹಾವೇರಿ | 80 | 1 | 0 | 25 | 0 | 37 | 27 | 0 | 1 | 0 | 0 | 0 | 171 |
| | ಒಟ್ಟು | 641 | 60 | 6 | 251 | 12 | 387 | 209 | 1 | 44 | 7 | 1 | 3 | 1622 |
| | ಕಲಬುರಗಿ ವಿಭಾಗ | | | | | | | | | | | | | |
| 1 | ಬೀದರ್ | 77 | 1 | 0 | 27 | 3 | 34 | 28 | 0 | 0 | 0 | 0 | 1 | 171 |
| 2 | ಕಲಬುರಗಿ | 132 | 10 | 0 | 70 | 0 | 51 | 34 | 0 | 0 | 0 | 0 | 0 | 297 |
| 3 | ರಾಯಚೂರು | 92 | 1 | 1 | 32 | 0 | 69 | 29 | 0 | 6 | 0 | 0 | 0 | 230 |
| 4 | ಯಾದಗಿರಿ | 49 | 0 | 0 | 21 | 0 | 19 | 18 | 0 | 0 | 0 | 0 | 0 | 107 |
| | ಒಟ್ಟು | 350 | 12 | 1 | 150 | 3 | 173 | 109 | 0 | 6 | 0 | 0 | 1 | 805 |
| | ಹೊಸಪೇಟೆ ವಿಭಾಗ | | | | | | | | | | | | | |
| 1 | ಬಳ್ಳಾರಿ | 169 | 1 | 1 | 37 | 2 | 65 | 42 | 0 | 2 | 6 | 0 | 2 | 327 |
| 2 | ಚಿತ್ರದುರ್ಗ | 83 | 1 | 0 | 20 | 0 | 111 | 25 | 0 | 2 | 1 | 0 | 0 | 243 |
| 3 | ದಾವಣಗೆರೆ | 99 | 3 | 0 | 17 | 0 | 110 | 32 | 3 | 2 | 1 | 0 | 0 | 267 |
| 4 | ಗದಗ | 55 | 10 | 0 | 32 | 0 | 24 | 15 | 0 | 6 | 0 | 0 | 0 | 142 |
| 5 | ಕೊಪ್ಪಳ | 56 | 2 | 0 | 48 | 0 | 18 | 21 | 0 | 16 | 7 | 0 | 0 | 168 |
| | ಒಟ್ಟು | 462 | 17 | 1 | 154 | 2 | 328 | 135 | 3 | 28 | 15 | 0 | 2 | 1147 |
| | ಮಂಗಳೂರು ವಿಭಾಗ | | | | | | | | | | | | | |
| 1 | ದಕ್ಷಿಣ ಕನ್ನಡ | 153 | 6 | 1 | 76 | 2 | 216 | 24 | 21 | 2 | 2 | 1 | 2 | 506 |
| 2 | ಕೊಡಗು | 87 | 20 | 4 | 35 | 2 | 66 | 9 | 1 | 0 | 0 | 0 | 1 | 225 |
| 3 | ಶಿವಮೊಗ್ಗ | 130 | 9 | 0 | 29 | 1 | 67 | 31 | 0 | 4 | 3 | 0 | 1 | 275 |
| 4 | ಉಡುಪಿ | 89 | 3 | 0 | 81 | 1 | 201 | 14 | 13 | 0 | 0 | 1 | 0 | 403 |
| 5 | ಉತ್ತರ ಕನ್ನಡ | 80 | 3 | 0 | 18 | 2 | 31 | 17 | 0 | 1 | 5 | 0 | 4 | 161 |
| | ಒಟ್ಟು | 539 | 41 | 5 | 239 | 8 | 581 | 95 | 35 | 7 | 10 | 2 | 8 | 1570 |
| | ಮೈಸೂರು ವಿಭಾಗ | | | | | | | | | | | | | |
| 1 | ಚಾಮರಾಜನಗರ | 63 | 1 | 0 | 21 | 0 | 28 | 13 | 1 | 0 | 0 | 0 | 0 | 127 |
| 2 | ಚಿಕ್ಕಮಗಳೂರು | 84 | 11 | 2 | 29 | 0 | 75 | 26 | 0 | 3 | 0 | 0 | 1 | 231 |
| 3 | ಹಾಸನ | 147 | 11 | 0 | 73 | 1 | 74 | 33 | 5 | 11 | 1 | 0 | 1 | 357 |
| 4 | ಮಂಡ್ಯ | 104 | 3 | 0 | 41 | 0 | 86 | 35 | 0 | 2 | 3 | 0 | 3 | 277 |
| 5 | ಮೈಸೂರು ನಗರ | 105 | 17 | 2 | 62 | 4 | 100 | 8 | 25 | 2 | 3 | 2 | 0 | 330 |
| 6 | ಮೈಸೂರು ಗ್ರಾಮಾಂತರ | 76 | 0 | 1 | 87 | 0 | 40 | 27 | 0 | 0 | 0 | 0 | 1 | 232 |
| | ಒಟ್ಟು | 579 | 43 | 5 | 313 | 5 | 403 | 142 | 31 | 18 | 7 | 2 | 6 | 1554 |
| | ರಾಜ್ಯದ ಒಟ್ಟು | 3964 | 263 | 78 | 1522 | 68 | 3616 | 876 | 590 | 204 | 90 | 55 | 34 | 11360 |

# ಕರ್ನಾಟಕ ವಿಧಾನ ಸಭೆ

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1337

2] ಮಾನ್ಯ ಸದಸ್ಯರ ಹೆಸರು : ಶ್ರೀ ಸತೀಶ್ ಎಲ್. ಜಾರಕಿಹೊಳಿ (ಯಮಕನಮರಡಿ)

3] ಉತ್ತರಿಸುವ ದಿನಾಂಕ : 09.03.2021

4] ಉತ್ತರಿಸುವ ಸಚಿವರು : ಗೃಹ , ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಯಮಕನಮರಡಿಯ ಆರಕ್ಷಕ ಠಾಣೆಯ ಕಟ್ಟಡ ತುಂಬಾ ಹಳೆಯದಾಗಿದ್ದು ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು. ದಿನಾಂಕ:04.09.2018 ರಂದು ಸದರಿ ಕಟ್ಟಡವನ್ನು ನೆಲಸಮಗೊಳಿಸಲು ಅನುಮತಿ ನೀಡಲಾಗಿದೆ. |
| ಆ) | ಬಂದಿದ್ದಲ್ಲಿ, ನೂತನ ಕಟ್ಟಡವನ್ನು ಯಾವಾಗ ನಿರ್ಮಾಣ ಮಾಡಲಾಗುವುದು? | ಅನುದಾನ ಲಭ್ಯತೆಯ ಮೇಲೆ ಸದರಿ ಪೊಲೀಸ್ ಠಾಣೆ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ ಪರಿಶೀಲಿಸಲಾಗುವುದು. |

**ಸಂಖ್ಯೆ: ಹೆಚ್‌ಡಿ 23 ಪಿಬಿಎಲ್ 2021**

[ಬಸವರಾಜ ಬೊಮ್ಮಾಯಿ]
ಗೃಹ , ಕಾನೂನು ಮತ್ತು ಸಂಸದೀಯ
ವ್ಯವಹಾರಗಳು &ಶಾಸನ ರಚನೆ ಸಚಿವರು

**ಕರ್ನಾಟಕ ವಿಧಾನಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1216
ಮಾನ್ಯ ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)
ಉತ್ತರಿಸುವ ದಿನಾಂಕ : 09.03.2021
ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಿನಾಂಕ: 01.04.2006 ರಿಂದ ನೇಮಕಾತಿ ಹೊಂದಿದ ಸರ್ಕಾರಿ ಸಿಬ್ಬಂದಿಗಳ ನೂತನ ಪಿಂಚಣಿ ಯೋಜನೆಯನ್ನು ರದ್ದುಪಡಿಸಿ, ಹಳೆ ಪಿಂಚಣಿ ಯೋಜನೆಯನ್ನು ಮುಂದುವರಿಸಲು ರಾಜ್ಯದಾದ್ಯಂತ ಪ್ರತಿಭಟನೆ / ಮನವಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಬಂದಿದ್ದಲ್ಲಿ, ನೂತನ ಪಿಂಚಣಿ ಯೋಜನೆಯನ್ನು ರದ್ದುಪಡಿಸಿ, ಹಳೆ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರದ ಕ್ರಮವೇನು: ಈ ಬಗ್ಗೆ ಕೈಗೊಂಡಿರುವ ಕ್ರಮಗಳೇನು; | ಕೇಂದ್ರ ಸರ್ಕಾರವು ಜಾರಿಗೊಳಿಸಿರುವ ನೂತನ ಪಿಂಚಣಿ ಯೋಜನೆಯನ್ವಯ ರಾಜ್ಯದಲ್ಲಿಯೂ ಈ ಯೋಜನೆಯನ್ನು 2006 ರಿಂದ ಅಳವಡಿಸಿಕೊಳ್ಳಲಾಗಿದೆ. ನೂತನ ಪಿಂಚಣಿ ಯೋಜನೆಯನ್ನು ರದ್ದುಪಡಿಸುವ ಪ್ರಸ್ತಾವನೆಯು ಇರುವುದಿಲ್ಲ. |
| ಇ) | ನೂತನ ಪಿಂಚಣಿಗೆ ಒಳಪಡುವ ನೌಕರರ ಮಾಹಿತಿಯನ್ನು ಇಲಾಖಾವಾರು ನೀಡುವುದು; | ಅನುಬಂಧದಲ್ಲಿ ಒದಗಿಸಲಾಗಿದೆ. |
| ಈ) | ಈ ಸರ್ಕಾರಿ ನೌಕರರನ್ನು ಹಿಂದಿನ ಪಿಂಚಣಿ ಯೋಜನೆಗೆ ಒಳಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಈ ನೌಕರರನ್ನು ಹಿಂದಿನ ಪಿಂಚಣಿ ಯೋಜನೆಗೆ ಒಳಪಡಿಸುವ ಪ್ರಸ್ತಾವನೆಯು ಇರುವುದಿಲ್ಲ. |
| ಉ) | ಈ ನೂತನ ಪಿಂಚಣಿ ಯೋಜನೆಯ ಪ್ರಯೋಜನಗಳೇನು? | ನೂತನ ಪಿಂಚಣಿ ಯೋಜನೆಯಡಿ ಇರುವ ಪ್ರಯೋಜನಗಳ ವಿವರ ಕೆಳಕಂಡಂತಿದೆ:–<br><br>1. ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ (ಎಸ್.ಪಿ.ಎಲ್) 203 ಪಿಇಎನ್ 2012 (ಪಿ), ದಿನಾಂಕ: 18.05.2016 ರಂತೆ ಎನ್.ಪಿ.ಎಸ್. ಯೋಜನೆಯಡಿ ನೌಕರರು ನಿವೃತ್ತರಾದರೆ/ ಸೇವೆಯಲ್ಲಿರುವಾಗಲೇ ಮೃತರಾದರೆ / ರಾಜೀನಾಮೆ ನೀಡಿದ ಸಂದರ್ಭದಲ್ಲಿಅವರುಗಳ ಪ್ರಾನ್ ಖಾತೆಯಲ್ಲಿನ ಮೊತ್ತವನ್ನು ಈ ಕೆಳಕಂಡಂತೆ ಇತ್ಯರ್ಥಪಡಿಸಲಾಗುವುದು.<br><br>a) ನೂತನ ಪಿಂಚಣಿ ಯೋಜನೆಯಡಿ ನಿವೃತ್ತಿ ಹೊಂದಿದ ನೌಕರರ ಪ್ರಾನ್ ಖಾತೆಯಲ್ಲಿ ರೂ. 2.00 ಲಕ್ಷಕ್ಕಿಂತ ಕಡಿಮೆ ಮೊತ್ತವಿದ್ದರೆ ನೌಕರರಿಗೆ ಪ್ರಾನ್ ಖಾತೆಯಲ್ಲಿರುವ ಸಂಪೂರ್ಣ ಮೊತ್ತವನ್ನು ಇತ್ಯರ್ಥಪಡಿಸಲಾಗುವುದು. |

ಹಾಗೂ ಪ್ರಾನ್ ಖಾತೆಯಲ್ಲಿನ ಮೊತ್ತವು ರೂ. 2.00 ಲಕ್ಷಕ್ಕಿಂತ ಮೇಲ್ಪಟ್ಟಿದ್ದರೆ ಪ್ರಾನ್ ಖಾತೆಯಲ್ಲಿರುವ ಮೊತ್ತದ ಶೇ. 60%ರಷ್ಟು ಮೊತ್ತವನ್ನು ನೌಕರರು ಹಿಂಪಡೆಯಬಹುದಾಗಿದ್ದು, ಉಳಿದ ಶೇ. 40% ರಷ್ಟು ಮೊತ್ತವನ್ನು ಕಡ್ಡಾಯವಾಗಿ Annuity Service Provider ನಲ್ಲಿ ಹೂಡಿಕೆ ಮಾಡಿ ಮಾಸಿಕ ಪಿಂಚಣಿ ಪಡೆಯಬಹುದಾಗಿರುತ್ತದೆ.

b) ನೂತನ ಪಿಂಚಣಿ ಯೋಜನೆಯಡಿಯಲ್ಲಿ ಸೇವೆಗೆ ರಾಜೀನಾಮೆ ನೀಡಿದ ನೌಕರರ ಪ್ರಾನ್ ಖಾತೆಯಲ್ಲಿ ರೂ. 1.00 ಲಕ್ಷಕ್ಕಿಂತ ಕಡಿಮೆ ಮೊತ್ತವಿದ್ದರೆ ನೌಕರರ ಪ್ರಾನ್ ಖಾತೆಯಲ್ಲಿನ ಸಂಪೂರ್ಣ ಮೊತ್ತವನ್ನು ಇತ್ಯರ್ಥಪಡಿಸಲಾಗುವುದು. ನೌಕರರ ಪ್ರಾನ್ ಖಾತೆಯಲ್ಲಿನ ಮೊತ್ತವು ರೂ. 1.00 ಲಕ್ಷಕ್ಕಿಂತ ಮೇಲ್ಪಟ್ಟಿದ್ದರೆ ಶೇ. 20% ರಷ್ಟು ಮೊತ್ತವನ್ನು ನೌಕರರು ಹಿಂಪಡೆಯ- ಬಹುದಾಗಿದ್ದು, ಉಳಿಕೆ ಶೇ. 80% ರಷ್ಟು ಮೊತ್ತವನ್ನು ಕಡ್ಡಾಯವಾಗಿ Annuity Service Provider ನಲ್ಲಿ ಹೂಡಿಕೆ ಮಾಡಿ ಮಾಸಿಕ ಪಿಂಚಣಿ ಪಡೆಯಬಹುದಾಗಿರುತ್ತದೆ.

c) ನೌಕರರು ಸೇವೆಯಲ್ಲಿರುವಾಗಲೇ ಮೃತರಾದ ಸಂದರ್ಭದಲ್ಲಿ ಪ್ರಾನ್ ಖಾತೆಯಲ್ಲಿ ರೂ. 2.00 ಲಕ್ಷ ಕ್ಕಿಂತ ಕಡಿಮೆ ಮೊತ್ತವಿದ್ದರೆ, ಮೃತರ ನಾಮ ನಿರ್ದೇಶಿತರಿಗೆ ಸಂಪೂರ್ಣ ಮೊತ್ತವನ್ನು ಇತ್ಯರ್ಥ ಪಡಿಸಲಾಗುವುದು. ಪ್ರಾನ್ ಖಾತೆಯಲ್ಲಿನ ಮೊತ್ತವು ರೂ. 2.00 ಲಕ್ಷಕ್ಕಿಂತ ಮೇಲ್ಪಟ್ಟಿದ್ದರೆ ಪ್ರಾನ್ ಖಾತೆಯಲ್ಲಿರುವ ಶೇ. 20% ರಷ್ಟು ಮೊತ್ತವನ್ನು ಮೃತರ ನಾಮನಿರ್ದೇಶಿತರಿಗೆ ಇತ್ಯರ್ಥಪಡಿಸಲಾಗುವುದು ಹಾಗೂ ಶೇ. 80% ರಷ್ಟು ಮೊತ್ತವು ಕಡ್ಡಾಯವಾಗಿ Annuity Service Provider ನಲ್ಲಿ ಹೂಡಿಕೆ ಮಾಡಿ ಮಾಸಿಕ ಪಿಂಚಣಿ ಪಡೆಯಬಹುದಾಗಿರುತ್ತದೆ.

2. ನೂತನ ಪಿಂಚಣಿ ಯೋಜನೆಯ ನೌಕರರು ಸೇವೆಯಿಂದ ನಿವೃತ್ತರಾಗುವ ಸಂದರ್ಭದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆಇ 34 ಪಿಇಎನ್ 2018, ದಿನಾಂಕ: 23.06.2018, ರನ್ವಯ ನಿವೃತ್ತಿ ಉಪದಾನವನ್ನು ಪಡೆಯಬಹುದಾಗಿದ್ದು ದಿನಾಂಕ: 01.04.2018 ರಿಂದ ಇದನ್ನು ಜಾರಿಗೊಳಿಸಲಾಗಿರುತ್ತದೆ.

3. ನೂತನ ಪಿಂಚಣಿ ಯೋಜನೆಯಡಿ ನೌಕರರು ಸೇವೆಯಲ್ಲಿರುವಾಗಲೇ ಮೃತರಾದರೆ ನೌಕರರ ಕುಟುಂಬಕ್ಕೆ ಈ ಕೆಳಕಂಡ ಸೌಲಭ್ಯವನ್ನು ನೀಡಲಾಗುವುದು.

a) ಇಡಿಗಂಟಿನ ಪರಿಹಾರ: ದಿನಾಂಕ: 31.03.2018 ರವರೆಗೆ

ಸೇವೆಯಲ್ಲಿರುವಾಗಲೇ ಮೃತರಾದ ಸರ್ಕಾರಿ ನೌಕರರ ಕುಟುಂಬಕ್ಕೆ ಇಡಿಗಂಟಿನ ಪರಿಹಾರವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 03 ಸೇನಿಸೇ 2010 ದಿನಾಂಕ: 12.10.2010 ಮತ್ತು 15.04.2011 ರನ್ವಯ ನೀಡಲಾಗುವುದು.

b) ದಿನಾಂಕ: 01.04.2018 ರಂದು ಮತ್ತು ತದನಂತರ ಸೇವೆಯಲ್ಲಿರುವಾಗಲೇ ಮೃತರಾದ ಸರ್ಕಾರಿ ನೌಕರರ ಕುಟುಂಬಕ್ಕೆ ಮರಣ ಉಪದಾನವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 34 ಪಿಇಎನ್ 2018, ದಿನಾಂಕ: 23.06.2018, ರನ್ವಯ ನೀಡಲಾಗುವುದು.

c) ಮೃತ ನೌಕರರ ನಾಮನಿರ್ದೇಶಿತರು ಸರ್ಕಾರದ ಆದೇಶ ಸಂಖ್ಯೆ: ಆಇ 34 ಪಿಇಎನ್ 2018, ದಿನಾಂಕ: 23.06.2018, ರನ್ವಯ ಪ್ರಾನ್ ಖಾತೆಯಲ್ಲಿ ಕ್ರೋಢೀಕೃತವಾಗಿರುವ ಸಂಪೂರ್ಣ ಮೊತ್ತವನ್ನು ಸರ್ಕಾರಕ್ಕೆ ಸಂದಾಯ ಮಾಡಿ "ಕುಟುಂಬ ಪಿಂಚಣಿ ನಿಯಮಗಳು, 2002" ರನ್ವಯ ಕುಟುಂಬ ಪಿಂಚಣಿಯನ್ನು ಪಡೆಯಬಹುದು. ಈ ಆಯ್ಕೆಯು ಐಚ್ಛಿಕವಾಗಿದ್ದು, ಒಮ್ಮೆ ಮಾಡಿಕೊಂಡ ಆಯ್ಕೆಯನ್ನು ಬದಲಿಸಲು ಅವಕಾಶವಿರುವುದಿಲ್ಲ.

4. ನೂತನ ಪಿಂಚಣಿ ನೌಕರರಿಗೆ ಆರ್ಥಿಕವಾಗಿ ಅನುಕೂಲವಾಗಲೆಂದು Tier-1 ಪ್ರಾನ್ ಖಾತೆಯಿಂದ ಭಾಗಶಃ ಮೊತ್ತವನ್ನು ಹಿಂಪಡೆಯಲು ಸರ್ಕಾರದ ಆದೇಶ ಸಂಖ್ಯೆ: FD (SPL) 69 PEN 2016, ದಿನಾಂಕ: 26.06.2018 ರಲ್ಲಿ ಆದೇಶಿಸಲಾಗಿದೆ. ಸದರಿ ಆದೇಶದ ಅನ್ವಯ 3 ವರ್ಷದ ಸೇವೆಯನ್ನು ಪೂರೈಸಿದ ನೂತನ ಪಿಂಚಣಿ ನೌಕರನ ವಂತಿಗೆಯ ಶೇ. 25% ಮೊತ್ತವನ್ನು (ನೌಕರರ ವಂತಿಗೆಯ ಮೇಲಿನ ಆದಾಯವನ್ನು ಹೊರತುಪಡಿಸಿ) ಕೆಳಕಾಣಿಸಿದ ಸಂದರ್ಭಗಳಲ್ಲಿ ಮಾತ್ರ ಹಿಂಪಡೆಯಬಹುದಾಗಿರುತ್ತದೆ.

1. ಮಕ್ಕಳ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ
2. ಮಕ್ಕಳ ಮದುವೆಯ ಸಂಬಂಧ
3. ಗೃಹ ನಿರ್ಮಾಣ/ ಖರೀದಿ ಸಂಬಂಧ
4. ವೈದ್ಯಕೀಯ ಕಾರಣ ನಿಮಿತ್ತ
5. ನೌಕರರ ವೃತ್ತಿ ಕೌಶಲ್ಯತೆ ಹೆಚ್ಚಿಸಿಕೊಳ್ಳಲು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ

**ಆಇ 47 ಪಿಇಎನ್ 2021**

(ಬಿ.ಎಸ್ ಯಡಿಯೂರಪ್ಪ)
ಮುಖ್ಯಮಂತ್ರಿ

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ವೇದವ್ಯಾಸ **ಕಾಮತ್ ಡಿ.** (ಮಂಗಳೂರು ನಗರ ದಕ್ಷಿಣ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:**1216**ಕ್ಕೆ ಅನುಬಂಧ

## ಇಲಾಖಾವಾರು ನೌಕರರ ವಿವರ

| ಕ್ರ.ಸಂ. | ಇಲಾಖೆಯ ಹೆಸರು | ನೌಕರರ ಸಂಖ್ಯೆ: |
|---|---|---|
| 1 | ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ | 51 |
| 2 | ಆಡಳಿತ ತರಬೇತಿ ಸಂಸ್ಥೆ | 96 |
| 3 | ಕೃಷಿ ಇಲಾಖೆ | 2557 |
| 4 | ಆಯುಷ್ ಇಲಾಖೆ | 662 |
| 5 | ಚೀಫ್ ಎಲೆಕ್ಟ್ರಿಕಲ್ ಇನ್ಸ್ಪೆಕ್ಟರೇಟ್ | 155 |
| 6 | ಆದಾಯ ತೆರಿಗೆ ಇಲಾಖೆ | 1396 |
| 7 | ಕಾನೂನು ಮೆಟ್ರೋಲಜಿ ನಿಯಂತ್ರಕರು | 80 |
| 8 | ಸಹಕಾರ ಇಲಾಖೆ | 706 |
| 9 | ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯ | 12308 |
| 10 | ವಿಪತ್ತು ಪ್ರತಿಕ್ರಿಯೆ | 31 |
| 11 | ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ | 10 |
| 12 | ಪುರ ಸಭೆ ಆಡಳಿತ ನಿರ್ದೇಶನಾಲಯ | 115 |
| 13 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | 1594 |
| 14 | ಔಷಧ ನಿಯಂತ್ರಣ ಇಲಾಖೆ | 297 |
| 15 | ಆರ್ಥಿಕ ಸಾಂಖ್ಯಿಕ ಇಲಾಖೆ | 323 |
| 16 | ಶಿಕ್ಷಣ ಇಲಾಖೆ | 74950 |
| 17 | ಚುನಾವಣೆ | 3 |
| 18 | ಉದ್ಯೋಗ ಮತ್ತು ತರಬೇತಿ ಇಲಾಖೆ | 993 |
| 19 | ಕಾರ್ಖಾನೆ ಮತ್ತು ಬಾಯ್ಲರ್ಸ್ ಇಲಾಖೆ | 57 |
| 20 | ಆರ್ಥಿಕ ನೀತಿ ಸಂಸ್ಥೆ ಇಲಾಖೆ | 3 |
| 21 | ಅಗ್ನಿ ಶಾಮಕ ಸೇವೆಗಳು | 2948 |
| 22 | ಮೀನುಗಾರಿಕೆ ಇಲಾಖೆ | 382 |
| 23 | ಆಹಾರ ಮತ್ತು ನಾಗರೀಕ ಸರಬರಾಜು, ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | 172 |
| 24 | ಅರಣ್ಯ ಇಲಾಖೆ | 6057 |
| 25 | ಸರ್ಕಾರಿ ಮುದ್ರಣಾಲಯ | 183 |
| 26 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. | 22547 |
| 27 | ತೋಟಗಾರಿಕೆ ಇಲಾಖೆ | 2075 |
| 28 | ಮಾನವ ಹಕ್ಕುಗಳ ಆಯೋಗ | 7 |
| 29 | ವಾಣಿಜ್ಯ ಮತ್ತು ಕೈಗಾರಿಕೆಗಳ ಇಲಾಖೆ | 183 |
| 30 | ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ | 87 |
| 31 | ಜಲಸಂಪನ್ಮೂಲ ಇಲಾಖೆ | 584 |
| 32 | ಕನ್ನಡ ಮತ್ತು ಸಂಸ್ಕೃತಿ ಇಲಾಖೆ | 34 |
| 33 | ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ | 4 |
| 34 | ಕರ್ನಾಟಕ ಸರ್ಕಾರ ವಿಮಾ ಇಲಾಖೆ | 691 |

| | | |
|---|---|---|
| 35 | ಕರ್ನಾಟಕ ಲೋಕಸೇವಾ ಆಯೋಗ | 100 |
| 36 | ಕಾರ್ಮಿಕ ಇಲಾಖೆ | 142 |
| 37 | ಕರ್ನಾಟಕ ವಿಧಾನ ಸಭೆ ಸಚಿವಾಲಯ | 447 |
| 38 | ಗ್ರಂಥಾಲಯ ಇಲಾಖೆ | 533 |
| 39 | ಲೋಕಾಯುಕ್ತ ಇಲಾಖೆ | 395 |
| 40 | ಗಣಿ ಮತ್ತು ಭೂ ವಿಜ್ಞಾನ ಇಲಾಖೆ | 375 |
| 41 | ಸಣ್ಣ ನೀರಾವರಿ ಇಲಾಖೆ | 431 |
| 42 | ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆ | 5947 |
| 43 | ಮುಜರಾಯಿ ಇಲಾಖೆ | 52 |
| 44 | ಎನ್.ಸಿ.ಸಿ.ಇಲಾಖೆ | 274 |
| 45 | ಐಜಿಪಿ ಮೆಟ್ರೊಪಾಲಿಟನ್ ಟಾಸ್ಕ್ ಫೋರ್ಸ್ ಇಲಾಖೆ | 13 |
| 46 | ನಿವಾಸಿ ಆಯುಕ್ತರು, ಕರ್ನಾಟಕ ಭವನ ಕಚೇರಿ, ನವದೆಹಲಿ | 30 |
| 47 | ಒಳಾಡಳಿತ ಇಲಾಖೆ. | 56942 |
| 48 | ಲೋಕೋಪಯೋಗಿ ಇಲಾಖೆ | 3010 |
| 49 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | 12098 |
| 50 | ಕಂದಾಯ ಇಲಾಖೆ | 11075 |
| 51 | ಕಾರ್ಯದರ್ಶಿ, ರಾಜಭವನ ಸಚಿವಾಲಯ | 49 |
| 52 | ರೇಷ್ಮೆ ಇಲಾಖೆ | 364 |
| 53 | ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ | 91 |
| 54 | ಸಮಾಜ ಕಲ್ಯಾಣ ಇಲಾಖೆ | 4437 |
| 55 | ನೋಂದಣಿ ಮತ್ತು ಮುದ್ರಾಂಕ ಇಲಾಖೆ | 412 |
| 56 | ರಾಜ್ಯ ಲೆಕ್ಕಪತ್ರ ಇಲಾಖೆ | 435 |
| 57 | ರಾಜ್ಯ ಚುನಾವಣಾ ಆಯೋಗ | 9 |
| 58 | ರಾಜ್ಯ ಅಬಕಾರಿ ಇಲಾಖೆ | 2189 |
| 59 | ಕರ್ನಾಟಕ ವಿಧಾನ ಪರಿಷತ್ ಸಚಿವಾಲಯ | 89 |
| 60 | ಭೂಮಾಪನ ಮತ್ತು ಭೂ-ದಾಖಲೆ ಇಲಾಖೆ | 3458 |
| 61 | ಜವಳಿ ಮತ್ತು ಕೈಮಗ್ಗ ಇಲಾಖೆ | 69 |
| 62 | ಪ್ರವಾಸೋದ್ಯಮ ಇಲಾಖೆ | 28 |
| 63 | ನಗರ ಯೋಜನಾ ಇಲಾಖೆ | 229 |
| 64 | ಭಾಷಾಂತರ ಇಲಾಖೆ | 40 |
| 65 | ಸಾರಿಗೆ ಇಲಾಖೆ | 555 |
| 66 | ಖಜಾನೆ ಇಲಾಖೆ | 913 |
| 67 | ಬುಡಕಟ್ಟು ಕಲ್ಯಾಣ ಇಲಾಖೆ | 108 |
| 68 | ಪಶುಸಂಗೋಪನಾ ಇಲಾಖೆ | 3302 |
| 69 | ಜಲನಯನ ಅಭಿವೃದ್ಧಿ ಇಲಾಖೆ | 629 |
| 70 | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ | 61 |
| | **ಒಟ್ಟು** | **241672** |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1270 |
| ಸದಸ್ಯರ ಹೆಸರು | : | ಶ್ರೀ ಅಜಯ್ ಧರ್ಮ ಸಿಂಗ್ ಡಾ॥ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎಲ್ಲಾ ಮೂಲಗಳಿಂದ ಉತ್ಪತ್ತಿಯಾಗುತ್ತಿರುವ ವಿದ್ಯುತ್ ಪ್ರಮಾಣವೆಷ್ಟು; (ಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ 2020-21ನೇ ಸಾಲಿನಲ್ಲಿ ಏಪ್ರಿಲ್-2020 ರಿಂದ ಫೆಬ್ರವರಿ-2021ರ ಅಂತ್ಯದವರೆಗೆ ವಿವಿಧ ಮೂಲಗಳಿಂದ ಲಭ್ಯವಾದ ವಿದ್ಯುತ್ತಿನ ಪ್ರಮಾಣದ ವಿವರಗಳು ಕೆಳಕಂಡಂತಿವೆ: (ಕೋಷ್ಟಕ ಕೆಳಗೆ) |
| ಆ) | ಪ್ರಸ್ತುತ ರಾಜ್ಯದಲ್ಲಿ ವಿದ್ಯುತ್ ಬಳಕೆ ಬೇಡಿಕೆಯಿರುವ ಪ್ರಮಾಣವೆಷ್ಟು; | ರಾಜ್ಯದಲ್ಲಿ ದಿನವಹಿ ಬೇಡಿಕೆಯಷ್ಟು ವಿದ್ಯುತ್ತನ್ನು ಉತ್ಪಾದಿಸಲಾಗುತ್ತಿದೆ. |
| ಇ) | ಬೇಡಿಕೆಗೆ ಅನುಗುಣವಾಗಿ ವಿದ್ಯುತ್ ಉತ್ಪಾದನೆಯಾಗುತ್ತಿದೆಯೇ; | |
| ಈ) | ಹಾಗಿಲ್ಲದಿದ್ದಲ್ಲಿ, ಕೊರತೆಯಿರುವ ವಿದ್ಯುತ್‌ನ್ನು ಯಾವ ರೀತಿಯಲ್ಲಿ ಪೂರೈಸಲಾಗುತ್ತಿದೆ; | ಪ್ರಸ್ತುತ ರಾಜ್ಯದಲ್ಲಿ ಬೇಡಿಕೆಗೆ ಅನುಗುಣವಾಗಿ ವಿದ್ಯುತ್ ಉತ್ಪಾದನೆಯಾಗುತ್ತಿರುವುದರಿಂದ ಯಾವುದೇ ಕೊರತೆಯಿರುವುದಿಲ್ಲ. |
| ಉ) | ಅಂತಹ ವಿದ್ಯುತ್‌ನ್ನು ಯಾವ ದರದ ಆಧಾರದಲ್ಲಿ ಯಾರಿಂದ ಯಾವ ಪ್ರಮಾಣದಲ್ಲಿ ಖರೀದಿಸಿ ಯಾವ ದರಕ್ಕೆ ವಿತರಿಸಲಾಗುತ್ತಿದೆ? | |

| ಕ್ರ ಸಂ | ವಿದ್ಯುತ್ತಿನ ಮೂಲ | 2020-21 (ಏಪ್ರಿಲ್-20 ರಿಂದ ಫೆಬ್ರವರಿ-21ರ ಅಂತ್ಯದವರೆಗೆ) ಲಭ್ಯವಾದ ವಿದ್ಯುತ್ತಿನ ಪ್ರಮಾಣ (ದ.ಲ.ಯೂ.) (ತಾತ್ಕಾಲಿಕ) |
|---|---|---|
| 1 | ಜಲವಿದ್ಯುತ್ | 11467.269 |
| 2 | ಶಾಖೋತ್ಪನ್ನ | 7664.667 |
| 3 | ಕೇಂದ್ರ ಸರ್ಕಾರ ಸ್ವಾಮ್ಯದ ವಿದ್ಯುತ್ ಉತ್ಪಾದನಾ ಘಟಕಗಳಿಂದ ರಾಜ್ಯದ ಪಾಲು | 16606.57 |
| 4 | ಅಸಂಪ್ರದಾಯಿಕ (ನವೀಕರಿಸಬಹುದಾದ) ಮೂಲಗಳಿಂದ | 24885.06 |
| 5 | ಬೃಹತ್ ಐ.ಪಿ.ಪಿ. | 1895.0 |
| 6 | ಜಿಂದಾಲ್ | 257.49 |
| | ಒಟ್ಟು | **62776.06** |

ಸಂಖ್ಯೆ: ಎನರ್ಜಿ 47 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

,1

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1347 |
| ಸದಸ್ಯರ ಹೆಸರು | : | ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಸಂಗಬೆಟ್ಟು ಗ್ರಾಮದಲ್ಲಿ 110/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರ ಸ್ಥಾಪಿಸುವ ಉದ್ದೇಶ ಸರ್ಕಾರಕ್ಕಿದೆಯೇ; | ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಸಂಗಬೆಟ್ಟು ಗ್ರಾಮದಲ್ಲಿ 110/11 ಕೆ.ವಿ. ವಿದ್ಯುತ್ ಉಪ ಕೇಂದ್ರ ಸ್ಥಾಪಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ವತಿಯಿಂದ ಅನುಮೋದನೆ ನೀಡಲಾಗಿರುತ್ತದೆ. |
| ಆ) | ಸಂಗಬೆಟ್ಟು ಗ್ರಾಮದ ಸರ್ವೆ ನಂ.274/2ರ 3.02 ಎಕರೆ ಖಾಸಗಿ ಜಮೀನು ಮತ್ತು ನಂ.274/3, 0.77 ಎಕರೆ ಸರ್ಕಾರಿ ಜಮೀನಿನಲ್ಲಿ 110/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರ ಸ್ಥಾಪಿಸಲು ಭೂಮಿಗೆ 1,77,14,565.00 ರೂ. ದರ ನಿಗದಿ ಮಾಡಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಅನುಮೋದನೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ವಿದ್ಯುತ್ ಉಪಕೇಂದ್ರ ಸ್ಥಾಪನೆಗೆ ಅಗತ್ಯವಿರುವ ಭೂಮಿಗಾಗಿ ಸರ್ವೆ ನಂ.274/2 ರಲ್ಲಿ 3.02 ಎಕರೆ ಜಮೀನನ್ನು ಪ್ರತಿ ಸೆಂಟಿಗೆ ರೂ.55,000/- ರಂತೆ, ಒಟ್ಟು ರೂ.1,77,14,565/- (ಮುದ್ರಾಂಕ ಹಾಗೂ ನೊಂದಣಿ ಶುಲ್ಕ ಸೇರಿ)ಗಳನ್ನು ಪಾವತಿಸಿ, ಜಮೀನನ್ನು ಖರೀದಿಸಲು ಅನುಮೋದನೆ ನೀಡಲಾಗಿತ್ತು.<br><br>ಆದರೆ, ಸದರಿ ಜಮೀನು ಭೂ ಚಾಪೆಯ ವಿನ್ಯಾಸಕ್ಕೆ (Earth Mat) ಸೂಕ್ತವಾಗಿಲ್ಲದ ಕಾರಣ ಅದರ ಪಕ್ಕದಲ್ಲಿರುವ ಸರ್ವೆ ಸಂಖ್ಯೆ 274/03 ರಲ್ಲಿನ 77 ಸೆಂಟ್ಸ್ ಸರ್ಕಾರಿ ಜಮೀನನ್ನು ನಿಗಮಕ್ಕೆ ಹಂಚಿಕೆ ಮಾಡುವಂತೆ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ರವರನ್ನು ಕೋರಲಾಗಿತ್ತು.<br><br>ಸದರಿ ಜಮೀನಿನ ಸ್ಥಳಪರಿವೀಕ್ಷಣೆ ನಡೆಸಲಾಗಿದ್ದು, ಈ ಹಿಂದೆ ಗುರುತಿಸಲಾದ ಜಮೀನನ್ನು ಈ ಕೆಳಕಂಡ ಕಾರಣಗಳ ಹಿನ್ನೆಲೆಯಲ್ಲಿ, ಖರೀದಿಸಿರುವುದಿಲ್ಲ.<br><br>• ಗುರುತಿಸಲಾದ ಜಮೀನು ಸಮತಟ್ಟಾಗಿರದೆ ರಸ್ತೆ ನೆಲಮಟ್ಟದಿಂದ ಸುಮಾರು 8.5 ಮೀಟರ್ ನಿಂದ 31.5 ಮೀಟರ್‌ವರೆಗೆ ಎತ್ತರದಲ್ಲಿರುತ್ತದೆ. |
| ಇ) | ಹಾಗಿದ್ದಲ್ಲಿ, ಈ ಹಂತದಲ್ಲಿ ಈ ನಿಗಮವು ಸಂಗಬೆಟ್ಟು ಗ್ರಾಮದಲ್ಲಿ ಉಪಕೇಂದ್ರ ಸ್ಥಾಪಿಸಲು ಸೂಕ್ತವಾಗಿಲ್ಲದ ಕಾರಣ ನೀಡಿ ಹಂಚಿಕೆಯನ್ನು ರದ್ದುಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಮುಂದಿನ ಕ್ರಮವೇನು? (ವಿವರ ನೀಡುವುದು) | |

...2

| | | |
|---|---|---|
| | | • ಸದರಿ ಜಮೀನಿಗೆ ಸಂಪರ್ಕ ರಸ್ತೆ ಇಳಿ ಜಾರು ಹಾಗೂ ಬಹಳ ಕಿರಿದಾಗಿದ್ದು, ಉಪ–ಕೇಂದ್ರದ ಪರಿವರ್ತಕಗಳ ಸಾಗಾಣೆಗೆ ಬಳಸುವ ಟ್ರಕ್ ಟ್ರೈಲರ್‌ಗಳ ಚಾಲನೆ ಸಾಧ್ಯವಿರುವುದಿಲ್ಲ.<br>• ಸದರಿ ಜಾಗವನ್ನು ಸಮತಟ್ಟು ಮಾಡಿ ತಡೆಗೋಡೆ ಹಾಗೂ ಇತರೆ ಕಾಮಗಾರಿಗಳೊಂದಿಗೆ ಉಪಕೇಂದ್ರದ ಜಮೀನು ಸಿದ್ಧಪಡಿಸಲು ಸುಮಾರು ರೂ.10.00 ಕೋಟಿಗಳ ಅಧಿಕ ವೆಚ್ಚವಾಗುತ್ತದೆ.<br>• ಸದರಿ ಜಾಗದ ಸುತ್ತಲೂ ಅರಣ್ಯ ಪ್ರದೇಶವಿದ್ದು, ಪ್ರಸರಣ ಮಾರ್ಗಗಳನ್ನು ನಿರ್ಮಿಸಲು ಅನುಮತಿ ಪಡೆಯಲು ಕಷ್ಟಸಾಧ್ಯವಾಗಿರುತ್ತದೆ. ಹಾಗೂ ಭೂಗತ ಕೇಬಲ್ ಅಳವಡಿಸಲು ಉದ್ದೇಶಿಸಿದ್ದಲ್ಲಿ, ಹಲವಾರು ಕೋಟಿ ಹೆಚ್ಚುವರಿ ವೆಚ್ಚವನ್ನು ಭರಿಸಬೇಕಾಗುತ್ತದೆ.<br>• ಸದರಿ ಜಾಗವನ್ನು ಸಮತಟ್ಟು ಮಾಡಲು ಇಳಿಜಾರು ಪ್ರದೇಶವನ್ನು ಕತ್ತರಿಸಿದ್ದಲ್ಲಿ, ಇಡೀ ಪ್ರದೇಶದ ಪರಿಸರ ವ್ಯವಸ್ಥೆಯಲ್ಲಿ ಏರುಪೇರಾಗಿ ಮಳೆಗಾಲದಲ್ಲಿ ಕೊಡಗು ಜಿಲ್ಲೆಯ ಹಲವು ಪ್ರದೇಶದಲ್ಲಿ ಆದಂತೆ ಭೂ ಕುಸಿತವಾಗುವ ಸಂಭವವಿರುತ್ತದೆ.<br>• ಸಾಮಾನ್ಯವಾಗಿ 110 ಕೆ.ವಿ ಉಪ–ಕೇಂದ್ರ ನಿರ್ಮಿಸಲು ಸುಮಾರು 2.00 ಎಕರೆ ಜಾಗ ಭೇಕಾಗಿದ್ದು, ಉಪ–ಕೇಂದ್ರ ನಿರ್ಮಾಣದ ಒಟ್ಟು ವೆಚ್ಚ ಸುಮಾರು ರೂ.7.00 ಕೋಟಿಗಳಾಗುತ್ತದೆ. ಆದರೆ, ಮೇಲೆ ಹೇಳಿರುವ ಅಂಶಗಳನ್ನು ಪರಿಗಣಿಸಿದಲ್ಲಿ, ಕೇವಲ ಉಪ–ಕೇಂದ್ರದ ಜಾಗವನ್ನು ಸಿದ್ಧಪಡಿಸಲು ಹೆಚ್ಚುವರಿಯಾಗಿ ಸುಮಾರು ರೂ.15.00 ಕೋಟಿ ವೆಚ್ಚ ತಗಲುತ್ತದೆ (ಭೂಮಿ ಸಮತಟ್ಟು ಮಾಡುವುದು, ತಡೆಗೋಡೆ ನಿರ್ಮಿಸುವುದು, ಮಳೆ ನೀರು ಚರಂಡಿ ನಿರ್ಮಿಸುವುದು, ಭೂ ಥಾಪೆಗಾಗಿ ಹೆಚ್ಚುವರಿ ಜಮೀನು ಖರೀದಿಸುವಿಕೆ, ಭೂಗತ ಕೇಬಲ್ ಅಳವಡಿಕೆ ಇತ್ಯಾದಿ) ಈ ರೀತಿ ಅನಗತ್ಯ ಭರಿಸಿದಲ್ಲಿ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗುತ್ತದೆ.<br>ಆದ ಕಾರಣ, ಸದರಿ ಜಮೀನಿನ ಖರೀದಿ ಪ್ರಸ್ತಾಪವನ್ನು ಕೈಬಿಡಲಾಗಿರುತ್ತದೆ. ಹಾಗೂ ಉಪಕೇಂದ್ರ ಸ್ಥಾಪನೆಗೆ ಅಗತ್ಯವಿರುವ ಪರ್ಯಾಯ ಜಮೀನನ್ನು ಗುರುತಿಸಿ ಖರೀದಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದೆ. |

**ಸಂಖ್ಯೆ: ಎನರ್ಜಿ 66 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1344 |
| ಸದಸ್ಯರ ಹೆಸರು | : | ಶ್ರೀ ಶಿವಲಿಂಗೇಗೌಡ ಕೆ ಎಂ.(ಅರಸೀಕೆರೆ) |
| ಉತ್ತರಿಸಬೇಕಾದ ದಿನಾಂಕ | : | 09.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯ ಮಂತ್ರಿಯವರು |

******

| | ಪ್ರಶ್ನೆ | ಉತ್ತರ |
|---|---|---|
| ಅ) | ಅಕ್ರಮ-ಸಕ್ರಮ ಯೋಜನೆಯಡಿ ನೋಂದಣಿ ಮಾಡಿಸಿಕೊಂಡು ತಲಾ ಇಬ್ಬರು ರೈತರುಗಳ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕಕ್ಕಾಗಿ ಒಂದು ಟಿ.ಸಿ ನೀಡುತ್ತಿರುವುದು ನಿಜವೇ; | ಪ್ರಸ್ತುತ, ರಾಜ್ಯದಲ್ಲಿ ಅನಧಿಕೃತ ಅಥವಾ ಹೊಸ ಪಂಪ್‌ಸೆಟ್ ಎಂಬ ಭೇದವಿಲ್ಲದೇ ನೋಂದಾಯಿಸುವ ಎಲ್ಲಾ ಪಂಪ್‌ಸೆಟ್ ಅರ್ಜಿಗಳಿಗೆ ಸರ್ಕಾರದ ಸುತ್ತೋಲೆ ಸಂಖ್ಯೆ ಇಎನ್ 41 ವಿಎಸ್‌ಸಿ 2014/ಪಿ1 ದಿನಾಂಕ: 14-07-2014 & 23-07-2014 ಗಳನ್ವಯ ಜೇಷ್ಠತೆ ಆಧಾರದ ಮೇಲೆ ವಿದ್ಯುತ್ ಸಂಪರ್ಕ ಕಲ್ಪಿಸಲು ವಿದ್ಯುತ್ ಸರಬರಾಜು ಕಂಪನಿಗಳು ಕ್ರಮವಹಿಸುತ್ತಿವೆ.<br><br>ಅರ್ಜಿ ನೋಂದಣಿಗೊಂಡ ನಂತರ ಸ್ಥಳ ಪರಿಶೀಲನೆ ನಡೆಸಿ, ಹಾಲಿಯಿರುವ ಪರಿವರ್ತಕದ ಮೇಲಿನ ವಿದ್ಯುತ್ ಹೊರೆಯನ್ನು ಪರಿಗಣಿಸಿ, ತಾಂತ್ರಿಕವಾಗಿ ಸಾಧ್ಯವಿದ್ದಲ್ಲಿ; ಅದೇ ಪರಿವರ್ತಕದಿಂದ ಪಂಪ್‌ಸೆಟ್‌ಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗುತ್ತಿದೆ. ಒಂದು ವೇಳೆ ಹಾಲಿಯಿರುವ ಪರಿವರ್ತಕದಿಂದ ಸಂಪರ್ಕ ಕಲ್ಪಿಸಲು ಸಾಧ್ಯವಾಗದಿದ್ದಲ್ಲಿ; ಹೆಚ್ಚುವರಿ ಪರಿವರ್ತಕವನ್ನು ಅಳವಡಿಸಿ, ಪಂಪಸೆಟ್‌ಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗುತ್ತಿದೆ. |
| ಆ) | ಕೇವಲ ಒಬ್ಬ ರೈತ ನೋಂದಣಿ ಮಾಡಿಸಿಕೊಂಡಿದ್ದು, ಇದುವರೆಗೂ ಅವನಿಗೆ ಟಿ.ಸಿ ಒದಗಿಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಬಂದಿದ್ದಲ್ಲಿ, ಅಂತಹ ವ್ಯಕ್ತಿಗಳ ಕೊಳವೆ ಬಾವಿಗಳಿಗೆ ಟಿ.ಸಿ ನೀಡಲು ಸರ್ಕಾರ ಕ್ರಮವಹಿಸಲಾಗುವುದೇ? | |

ಸಂಖ್ಯೆ: ಎನರ್ಜಿ 64 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ